# ಕರ್ನಾಟಕ ವಿಧಾನ ಪರಿಷತ್

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1226 |
| 2. ಸದಸ್ಯರ ಹೆಸರು | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ., (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3. ಉತ್ತರಿಸಬೇಕಾದ ದಿನಾಂಕ | 17-03-2021 |
| 4. ಉತ್ತರಿಸಬೇಕಾದ ಸಚಿವರು | ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಾರವಾರ ಜಿಲ್ಲೆಯಲ್ಲಿನ ಮೀನುಗಾರರು ನಿರಂತರವಾಗಿ ಏರುತ್ತಿರುವ ಪೆಟ್ರೋಲ್, ಡೀಸೆಲ್ ದರದಿಂದ ಕಂಗಾಲಾಗಿ ಮೀನುಗಾರಿಕೆಯನ್ನು ಸ್ಥಗಿತಗೊಳಿಸಿ ಬೋಟ್‌ಗಳನ್ನು ದಡದಲ್ಲಿ ನಿಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ವಿವರ ನೀಡುವುದು | ಉತ್ತರ ಕನ್ನಡ ಜಿಲ್ಲೆಯಲ್ಲಿ ಮೀನುಗಾರಿಕೆ ದೋಣಿಗಳಿಗೆ ನಿರೀಕ್ಷಿತ ಮಟ್ಟದಲ್ಲಿ ಮೀನು ಸಿಗುತ್ತಿಲ್ಲವಾದ ಕಾರಣ ಹಾಗೂ ಮೀನುಗಾರಿಕೆ ದೋಣಿಗಳು ಬಳಸುವ ಡೀಸೆಲ್ ದರ ಮತ್ತು ಇತರೆ ಕಾರ್ಯಚರಣೆ ಮತ್ತು ನಿರ್ವಹಣಾ ವೆಚ್ಚಗಳು ಹೆಚ್ಚಿರುವ ಕಾರಣ ಬಹುತೇಕ ದೋಣಿಗಳು ಮೀನುಗಾರಿಕೆಯನ್ನು ಸ್ಥಗಿತಗೊಳಿಸಿವೆ. |
| ಆ. | ಈ ಮೊದಲು ಕೇಂದ್ರ ಸರ್ಕಾರದಿಂದ ಮೀನುಗಾರರಿಗೆ ಡೀಸೆಲ್‌ಗೆ ಸಬ್ಸಿಡಿ ನೀಡಲಾಗುತ್ತಿದ್ದು, ಕೆಲವು ವರ್ಷಗಳಿಂದ ಕೇಂದ್ರ ಸರ್ಕಾರ ಸಬ್ಸಿಡಿ ನೀಡುವುದನ್ನು ಸ್ಥಗಿತಗೊಳಿಸಿರುವುದರಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮೀನುಗಾರರಿಗೆ ನೀಡುವ ಡೀಸೆಲ್ ಮೇಲಿನ ಸಬ್ಸಿಡಿಯನ್ನು ನೀಡಲು ಕ್ರಮ ಕೈಗೊಳ್ಳುವುದೇ? ವಿವರ ನೀಡುವುದು | ಹಿಂದೆ ಮೀನುಗಾರಿಕೆ ದೋಣಿಗಳಿಗೆ ವಿತರಿಸುವ ಡೀಸೆಲ್ ಮೇಲಿನ ಕೇಂದ್ರ ಅಬಕಾರಿ ಶುಲ್ಕ ವಿನಾಯಿತಿಯನ್ನು ಕೇಂದ್ರ ಸರ್ಕಾರದಿಂದ ನೀಡಲಾಗುತ್ತಿತ್ತು. 2013ರಲ್ಲಿ ಪ್ರತಿ ದೋಣಿಗೆ ಪ್ರತಿ ಲೀಟರ್‌ಗೆ ರೂ.3.00 ರಂತೆ ಪ್ರತಿ ಮಾಹೆಗೆ ಗರಿಷ್ಠ 500ಲೀಟರ್‌ಗೆ ಸಹಾಯಧನ ನೀಡಲು ಮತ್ತು ಈ ಸಹಾಯಧನ 20 ಮೀಟರ್‌ಕ್ಕಿಂತ ಕಡಿಮೆ ಉದ್ದವಿರುವ ದೋಣಿಗಳಿಗೆ ಮತ್ತು 10ನೇ ಪಂಚವಾರ್ಷಿಕ ಯೋಜನೆಗಿಂತ ಮೊದಲು ನೋಂದಣಿ ಹೊಂದಿ ಬಿಪಿಎಲ್ ಕಾರ್ಡ್ ಹೊಂದಿದ ಮಾಲೀಕರಿಗೆ ಅನ್ವಯವಾಗುತ್ತದೆಂದು ಕೇಂದ್ರ ಸರ್ಕಾರವು ಷರತ್ತು ವಿಧಿಸಿದ ಕಾರಣ ಈ ಪ್ರಯೋಜನ ಪಡೆಯಲು ಸಾಧ್ಯವಾಗದೆ ಸ್ಥಗಿತಗೊಂಡಿರುತ್ತದೆ.<br>ಪ್ರಸ್ತುತ, ಮೀನುಗಾರಿಕೆ ದೋಣಿಗಳು ಖರೀದಿಸುವ ಡೀಸೆಲ್ ಮೇಲಿನ ರಾಜ್ಯ ಮಾರಾಟಕರ ತೆರಿಗೆಯ ಮೊತ್ತವನ್ನು ದೋಣಿಗಳ ಮಾಲೀಕರಿಗೆ ನೇರ ನಗದು ವರ್ಗಾವಣೆ (DBT) ಮೂಲಕ ಮರುಪಾವತಿಸಲಾಗುತ್ತಿದೆ. |

ಸಂಖ್ಯೆ: ಪಸಂಮೀ ಇ-97 ಮೀಇಯೋ 2021

15/3/2021

(ಎಸ್.ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು